ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಏತ ನೀರಾವರಿ ಯೋಜನೆಗಳ ಬಗ್ಗೆ

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

730 (890) ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಹಾಗೂ ಸಣ್ಣ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಜಂಜೂರು-ನುಗ್ಗೇಹಳ್ಳಿ ಮತ್ತು ಹಿರೀಸಾವೆ-ಜುಟ್ಟನಹಳ್ಳಿ ಏತ ನೀರಾವರಿ ಯೋಜನೆಗಾಗಿ ಎಷ್ಟು ಗ್ರಾಮಗಳಲ್ಲಿ ಎಷ್ಟು ಎಕರೆ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಲಾಗಿದೆ ; ಜಮೀನು ಕಳೆದುಕೊಂಡಿರುವ ಸಂತ್ರಸ್ಥರ ಹೆಸರು ಮತ್ತು ಊರಿನ ವಿವರಗಳೊಂದಿಗೆ ಮಾಹಿತಿ ನೀಡುವುದು) ;

(ಆ) ಈ ಯೋಜನೆಗಳಿಗಾಗಿ ಭೂಮಿ ಕಳೆದುಕೊಂಡ ರೈತರಿಗೆ ಸರ್ಕಾರದಿಂದ ಪರಿಹಾರ ನೀಡಲು ಎಕರೆವಾರು ನಿಗದಿಪಡಿಸಿರುವ ಬೆಲೆ ಎಷ್ಟು ; ಇದಕ್ಕಾಗಿ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನವೆಷ್ಟು ಮತ್ತು ಇದರಲ್ಲಿ ಪರಿಹಾರ ನೀಡಿರುವ ಮೊತ್ತವೆಷ್ಟು;

(ಇ) ಈ ಯೋಜನೆಗಳಡಿ ಇದುವರೆಗೂ ಪರಿಹಾರ ಪಡೆದಿರುವ ಭೂ ಸಂತ್ರಸ್ಥರ ಹೆಸರು, ಪರಿಹಾರದ ಮೊತ್ತ ಮತ್ತು ಊರಿನ ವಿವರಗಳನ್ನು ನೀಡುವುದು ;

(ಈ) ಈ ಯೋಜನೆಗಳಡಿ ಇದುವರೆಗೂ ಪರಿಹಾರ ಪಡೆಯದ ಭೂ ಸಂತ್ರಸ್ಥರ ಹೆಸರು, ಪರಿಹಾರದ ಮೊತ್ತ ಮತ್ತು ಊರಿನ ವಿವರಗಳನ್ನು ನೀಡುವುದು ; ಇವರಿಗೆ ಪರಿಹಾರ ನೀಡಲು ವಿಳಂಬವಾಗಿರುವುದಕ್ಕೆ ಕಾರಣಗಳೇನು ?